


ಅತಿತುಂಗಾಕೃತಿಯಾದೊಡಾಗದದರೊಳ್
ಸೌಂದರ್ಯಮೌನ್ನತ್ಯಮುಂ|
ನುತ ಸೌಂದರ್ಯಮುಮಾಗೆ ಮತ್ತತಿಶಯಂ
ತಾನಾದೌನ್ನತ್ಯಮುಂ|
ನುತ ಸೌಂದರ್ಯಮುಮಾರ್ಜಿತಾತಿಶಯಮುಂ ತನ್ನಲ್ಲಿ
ನಿಂದಿರ್ದಿವೇಂ|
ಕ್ಷಿತಿ ಸಂಪೂಜ್ಯಮೊ ಗೊಮ್ಮಟೇಶ್ವರ
ಜಿನಶ್ರೀರೂಪಮಾತ್ಮೋಪಮಂ||
-ಬೊಪ್ಪಣ ಪಂಡಿತನ ಗೊಮ್ಮಟ ಸ್ತವನ



ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ,
ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ,
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ,
ಅಗಮ್ಯ,ಅಗೋಚರ,ಅಪ್ರತಿಮ
ಲಿಂಗವೆ,ಕೂಡಲಸಂಗಮದೇವಯ್ಯ
ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯ

ಸುರಸ್ವಪ್ನವಿದ್ದ ಪ್ರತಿಬಿಂಬ ಬಿದ್ದ
ಉದ್ಬುದ್ಧ ಶುದ್ಧ ನೀರೇ|
ಎಚ್ಚತ್ತು ಎದ್ದ ಆಕಾಶದುದ್ದ
ಧರೆಗಿಳಿಯಲಿದ್ದ ಧೀರೇ||
ಸಿರಿವಾರಿಜಾತ ವರಪಾರಿಜಾತ|
ತಾರಾ-ಕುಸುಮದಿಂದೆ||

ವೃಂದಾರವಂದ್ಯೆ ಮಂದಾರಗಂಧೆ|
ನೀನೆ ತಾಯಿ ತಂದೆ||
ರಸಪೂರಜನ್ಯೆ ನೀನಲ್ಲ ಅನ್ಯೆ|
ಸಚ್ಚಿದಾನಂದ ಕನ್ಯೆ ||

ಚಿತ್ರ: ಶಂಕರ್, ಚಂದಮಾಮ



ತೆರತೆರದ ಬಂಧನಂಗಳೊ|
ಳರರೇ!ಪಿರಿದಲ್ತೆ ಮೋಹಪಾಶದ ಬಂಧಂ||
ಮರನಂ ಕೊರೆವೊಡಮಾರಡಿ|
ಸೆರೆವೀಳ್ಗುಂ ಕಮಲಕೋಶ ಬಂಧದೊಳಲ್ತೇ||
-ಅಳಸಿಂಗರಾಚಾರ್ಯ(ಶ್ರೀಮತಿ ಪರಿಣಯಂ)



ಬಾಣನ ಭಕ್ತಿಯಂ ಮನೆಯ ಬಾಗಿಲು ಬಲ್ಲುದು,ಪಾರ್ಥ ಭಕ್ತಿಯಂ
ಬಾಣವು ಬಲ್ಲುದೊಂದಡಿಯು ಬಲ್ಲುದು ಕಣ್ಣಪನೊಳ್ಪು ಭಕ್ತಿಯಂ
ಮಾಣದೆ ನಿಮ್ಮ ಭಕ್ತಿಯಂ ಚಿತ್ತವು ಬಲ್ಲುದು........
-ಸಂಗವಿಭು(ಬಸವ ಶತಕ)


ಆವುದು ನೋಡೆಸೂಕ್ಷ್ಮಮದೆವಿಸ್ತೃತಮಪ್ಪುದು
ಮಧ್ಯದಲ್ಲಿ ತಾ |
ನಾವುದು ಭಿನ್ನ ಮಾಗಿರುವುದಂತದೆ ಜೋಡಿಸಿದಂತೆ
ತೋರ್ಪುದೈ |
ಆವುದು ವಕ್ರಮಿರ್ಪುದದೆ ತಾಂ ಋಜುವಾಗುತೆ
ಕಾಣುವುದೆನ್ನ ಕ|
ಣ್ಣಾವುದುಮಿಲ್ಲ ದೂರದೆ ಚಣಂ ರಥವೇಗದೆ
ಪಾರ್ಶ್ವದಲ್ಲಿಯುಂ||
ಕರ್ಣಾಟಕ ಶಾಕುಂತಲ-ಬಸವಪ್ಪಶಾಸ್ತ್ರೀ

ಚಿತ್ರ-ಶಂಕರ್,ಚಂದಮಾಮ



ಒಳ್ಳೆಯ ವಂಶದಲ್ಲಿ ಹುಟ್ಟಿದವರಿಗೆ ಸೌಜನ್ಯವೇ
ಕಬ್ಬಿಣದ್ದಲ್ಲದ ಸಂಕೋಲೆ
--ಹರ್ಷಚರಿತೆ

ಚಿತ್ರ :ವಡ್ಡಾದಿ ಪಾಪಯ್ಯ,ಚಂದಮಾಮ



ಭಾವ ಭಾಷೆಗೆ ಮೂಲ;ಭಾಷೆ ವೇಷಾವೇಶ|
ನಾಡಿಗಳ ಬಡಿತದಲು ಭಯವುಂಟು ನಯವುಂಟು||
...........
ಹುಟ್ಟುತ್ತಲೇ ಅತ್ತು ಶಂಖವೂದಿದ ಜೀವ
ಬರೆಯದಿರುವುದು ಸಾಧ್ಯ,ಒರೆಯದಿರುವುದಸಾಧ್ಯ||
ಮಾತಿಗೂ ಮೌನಕ್ಕೂ ಜಾತಿವೈರವು ಇಲ್ಲ. ಮೂಕನಲು
ಕಿವುಡನಲು ಮೌನಿಯಲು ನಾದವಿದೆ||
--ದ.ರಾ.ಬೇಂದ್ರೆ (ಭಾವ-ಭಾಷೆ)



ಆದರಣೆಯಿಲ್ಲದೂಟಂ|
ಸೋದರರಿಂದಾದ ಕಲಹ,ಮುಗಿಲೊಡ್ಡಣಮುಂ||
ಹಾದಿಗರೊಳಾದ ನೇಹಂ|
ಹೋದಪುವು ತಮ್ಮಿಂದೆ ತಾವು ಚೂಡಾರತ್ನ||

ಚಿತ್ರ: ಧರ್ಮರಾಯನಲ್ಲಿ ಅರ್ಜುನನ ಕ್ಷಮಾಪಣೆ

ಹೊಗುವಾಸೆಯಿಲ್ಲ, ಕಾಲ್ತೆಗೆವಾಸೆಯಿಲ್ಲ, ಸು-
ಮ್ಮನೆ ಮೇಲ ನಿಟ್ಟಿಸಿ ನಿಲ್ಲುವಾಸೆಯೆನಗೆ.
ಬೊಂಬೆಗೂಡಿದ ತೆನೆಯ ಗೋಪುರದ ಬಾಗಿಲಿನ
ಕತ್ತಲೆಯೊಳಿಣಿಕಿಣಿಕಿ ಏರಲೆನ್ನ ಬಗೆ
ಆ ಕತ್ತಲೊಳಹೊಕ್ಕು ಮರಳಿ ಹೊರಹಾರುವೀ
ಗಿಳಿಪಾರಿವಾಳಗಳ ಭ್ರಮಣೆಯನು ಕಂಡು
ಅವ್ಯಕ್ತದಿಂ ವ್ಯಕ್ತ ಹೊರಬರುವ ನಟನೆಯನು
ಚಿಂತಿಸುವುದೆನ್ನ ಮನ ಬಲು ಬೆರಗುಗೊಂಡು.
ಏನುಳಿವುದೇನಳಿವುದೀ ಒಳಹೊಗುವಾಟದಲ್ಲಿ
ಏನಳಿವುದೇನುಳಿವುದೀ ಹೊರಬರುಬಾಟದಲ್ಲಿ?
ಪು.ತಿ.ನ. (ಮಲೆ ದೇಗುಲ)



ನಾಲಗೆಗೆ ನಿಲುಕದಾ ನುಡಿಗಳುಂಟು,
ನುಡಿಗಳಿಗು ನಿಲುಕದಾ ಭಾವವುಂಟು.
ಭಾವಗಳ ಬೀಸುಬಲೆಯಲ್ಲಿ ದೊರಕದೆ ನುಸುಳಿ
ದಾಟಿರುವ ನೈಜ ಬೇರೊಂದು ಉಂಟು.
ಹೀಗೆಂದು ಕೇಳಿದೆನು-ಎಂದಮೇಲೆ
'ಮೌನಕ್ಕೆ ಮಾತುಂಟೆ?'
ಉಂಟು,ಉಂಟು.
--ದ.ರಾ.ಬೇಂದ್ರೆ



ನುಡಿಗೆ ತಕ್ಕ ನಡೆಯ ಕಂಡೊಡೆ
ಕೂಡಲಸಂಗಮದೇವನೊಳಗಿರ್ಪನಯ್ಯಾ



ಪರಾನ್ ತೋಷಯಿತುರ್ಧಾತುಃ ನ ಕದಾಪಿ ಧನಕ್ಷಯಃ|
ಉದ್ಧೃತೇಪಿ ನದೀ ಕೂಪಾತ್ ಜಲೇ ತಸ್ಯ ನಹಿ ಕ್ಷಯಃ||



ನೋಡಿದವರೆದೆಯಲ್ಲಿ ಕಿರಿಯತನವನು ಅಳಿಸಿ,
ತನ್ನ ಮೀರುವ ಹಿರಿತನಕೆ ಮಣಿದು ಮೈಮರೆವ
ಹಿರಿತನವು ಮೂಡುವಂತೆಸಗುವುದೆ
ಹೆಗ್ಗುರುತು
ದಿಟವಾದ ಹಿರಿತನಕೆ.
-ಕುವೆಂಪು




ಕುರುಹಿಂಗೆ ಪೂಜೆಯಲ್ಲದೆ
ಅರಿವಿಂಗೆ ಪೂಜೆಯೇ



ದಯೆ ವೃಕ್ಷಮೂಲಮೆನಿಕುಂ|
ನಿಯಮಂ ವೃತಿ,ಶೀಲಮಾಳವಾಳಮೆನಲ್ಕೇ||
ಳ್ಗಿಯನಾಳ್ದು ಸುಖದ ಫಲಪ್ರಾ|
ಪ್ತಿಯನಾಗಿಪ ಕಲ್ಪವೃಕ್ಷಮಲ್ಲವೆ ಧರ್ಮಂ||
ಗುಣವರ್ಮ'



ಅರಸ ಕೇಳೀಚೆಯಲಿ ಮನದು|
ಬ್ಬರದ ತನುವಿನ ತಳಿತ ರೋಮದ|
ಭರದ ತುಷ್ಠಿಯ ಬಳಿಯ ತೇಗುವಹಿಗ್ಗುವಳ್ಳೆಗಳ||
ಕೊರಳಿಗಡರುವ ಹೊಟ್ಟೆಗಳ ಋಷಿ|
ವರರು ಸಹ ದೂರ್ವಾಸ ಮುನಿಯ|
ಚ್ಚರಿಯವಾಳುತ ತನ್ನೊಳರಿದನು ಮುರಹರನ ಬರವ||
ಚಿತ್ರ-ವಡ್ಡಾದಿ ಪಾಪಯ್ಯ,ಚಂದಮಾಮ



ಕಾಲ ಕಳೆಯಲು ಕಲ್ತ ವಿದ್ಯೆ ಕ್ಷಯವಾಗುವುದು,
ಬದ್ಧಮೂಲಗಳಾದ ಮರಗಳಿಳೆಗುರುಳುವುವು,
ಜಲ,ಜಲಸ್ಥಾನವನು ಸೇರಿಯೂ ಬತ್ತುವುದು,
ಕೊಟ್ಟದ್ದು,ಹೋಮದಲಿ ಬೇಳಿದ್ದಿವೆರಡುಳಿವುವು.
ಕರ್ಣಭಾರ-ಎಲ್ ಗುಂಡಪ್ಪ



ಕಂಡು ಕಿಂಚಿತ್ ಪಾಕ ಶೇಷವ|
ಕೊಂಡು ಬಂದೊಡೆ ಕೃಷ್ಣನದ ಕೈ|
ಗೊಂಡು ಸವಿದನು ತಣಿದು ತಲೆ ದೂಗಿದನು
ತೇಗಿದನು||
ಪಾಂಡವರ ಪತಿಕರಿಸಿ ನಲಿವುತ|
ಜಾಂಡ ನುಡಿದನು ಹೃದಯ ಕ್ಷುಧೆಯನು|
ಖಂಡಿಸಿದೆಲಾಯೆನುತ ಕೊಂಡಾಡಿದನು ದ್ರೌಪದಿಯ||
ಚಿತ್ರ -ಶಂಕರ್,ಚಂದಮಾಮ



ಕಂಡು ಕಿಂಚಿತ್ಪಾಕಶೇಷವ
ಪುಂಡರೀಕಾಂಬಕನದನು ಕೈ
ಕೊಂಡು ತಾನದನುಂಡು ತಲೆದೂಗಿದನು ತೇಗಿದನು|
......
ಅರಸ ಕೇಳೀಚೆಯಲಿ ಮದದು
ಬ್ಬರದ ತನುವಿನ ತಳಿತ ರೋಮೋ
ತ್ಕರದ ಹೃಷ್ಟಿಯ ಬಳ್ಳಿದೇಗಿನ ಹಿಗ್ಗುವಳ್ಳೆಗಳ|
ಕೊರಳಿಗಡರಿದ ಹೊಟ್ಟಗಳ ಋಷಿ
ವರರು ಸಹ ದುರ್ವಾಸಮುನಿಯಾ
ಸರಸಿಜಾಕ್ಷನ ಬರವ ಕಂಡನು ದಿವ್ಯದೃಷ್ಟಿಯಲಿ||



ತರುಣಶಶಿ ಮಲ್ಲಿಕಾಮಾಲೆ ಕೆಂಜೆಡೆದುರುಬು
ವುರಿಗಣ್ಣು ಕತ್ತುರಿಯ ಬೊಟ್ಟು ಕಪಿಲಾಕ್ಷಿ ಸರ
ಸಿರುಹನಯನಂ ನಾಗಕುಂಡಲಂ ಪೊನ್ನೋಲೆಯೆಸೆವ
ಕಱೆ ರನ್ನದಾಳಿ||
ಸುರುಚಿರಸ್ಫಟಿಕಹಾರಂ ಹಾರಮಪ್ಪ ಕುಚ
ವರಪಯೋಧರಮಜಿನವಸನಂ ದುಕೂಲವಾ
ಕರಶೂಲಮಬುಜದೊಡರುಂ ನೇವುರಂ ಮೆಱೆವ
ದೇವನೆಮ್ಮಂ ಸಲಹಲಿ ||-ರಾಘವಾಂಕ
ಚಿತ್ರ-ವಡ್ಡಾದಿ ಪಾಪಯ್ಯ



ಒಂದುದಿನ ಪುಷ್ಪಕವಡರಿ ಮುದ|
ದಿಂದ ಧನಪನು ಮರ್ತ್ಯಲೋಕದ|
ಸಂದರುಶನಾಕಾಂಕ್ಷೆಯಲಿ ನಡೆತರಲು
ನಭಪಥದಿ||
ನೊಂದಳಾ ಕೈಕಸೆ ಕುಬೇರನೊ|
ಳೊಂದಿದೈಸಿರಿಗವಳ ಕಂದಿದ|
ಯಿಂದುವದನವು ದಶಶಿರನನಟ್ಟಿದುದು
ಕಾಳೆಗಕೆ||-ವಿಗ

ಚಿತ್ರ ವಡ್ಡಾದಿ ಪಾಪಯ್ಯ, ಚಂದಮಾಮ



ನುಂಗುವಂತಿರೆ ಗಗನವನು ಮಾ
ತಂಗ ಮಲ್ಲನನೇರಿ ದಾನವ
ಪುಂಗವನು ಬರತಾಗುರುತ್ಮನ ಪಕ್ಷಮೂಲದಲಿ|
ರಂಗನಾಥನನೆಸೆವ ಶಂಖ ರ
ಥಾಂಗ ಗದೆ ಶಾರ್ಙಂಗಳೆಸೆವ ಭು
ಜಂಗಳಲಿ ಭಾರ್ಯಾಸಮನ್ವಿತನಾಗಿರಲು ಕಂಡ||ಕೃಷ್ಣ
ಚರಿತೆ

ಚಿತ್ರ-ಎಂಟಿವಿ ಆಚಾರ್ಯ, ಚಂದಮಾಮ